ನವಸಾಕ್ಷರ ಪುಸ್ತಕ ಮಾಲೆ ೧೦೨

# ಚೌಡಮ್ಮನ ಜಾತ್ರೆ

ಜೆ. ಗಿರಿಜ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಾಲೆ

ಲಯ

. ಎಸ್.

ನಾಲಯ

್ಯರು

ಶ್ರೀಯುತರಾದ
ಹಾ. ಮಾ. ನಾಯಕ
ಎಚ್. ನರಸಿಂಹಯ್ಯ
ಜಿ. ನಾರಾಯಣ
ಎಲ್. ಎಸ್. ಶೇಷಗಿರಿರಾವ್
ಶಾಂತರಸ
ಕೆ. ವಿ. ಸುಬ್ಬಣ್ಣ
ಗೊ. ರು. ಚನ್ನಬಸಪ್ಪ
ಪಿ. ಎಸ್. ಶಂಕರ್
ಶಿವಶಂಕರ ಹಿರೇಮಠ
ಆರ್. ಎಸ್. ರಾಜಾರಾಮ್
ಶ್ರೀಮತಿ ಎಲ್. ಜಿ. ಸುಮಿತ್ರ

**ಸಂಪಾದಕ ಸಮಿತಿ**

*ಶ್ರೀಯುತರಾದ*
ಎಸ್. ಜಿ. ನಾಗಲೋಟಿಮಠ
ಕೆ. ವಿ. ನಾರಾಯಣ
ಪುರುಷೋತ್ತಮ ಬಿಳಿಮಲೆ
ಕರೀಗೌಡ ಬೀಚನಹಳ್ಳಿ
ಅಮೃತ ಸೋಮೇಶ್ವರ
ಸಿ. ಆರ್. ಚಂದ್ರಶೇಖರ್
ಬಿ. ಎ. ಶ್ರೀಧರ
ಲಿಂಗದೇವರು ಹಳೆಮನೆ
ಭ. ಮಲ್ಲಿಕಾರ್ಜುನ
ಮಹಾಬಲೇಶ್ವರರಾವ್
ಭಕ್ತಪ್ರಿಯ
ಎಂ. ಪಿ. ಪರಮಶೇಖರಯ್ಯ
ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ

ನವಸಾಕ್ಷರ ಪುಸ್ತಕ ಮಾಲೆ - ೧೦೭

# ಚೌಡಮ್ಮನ ಜಾತ್ರೆ




ಜಿ. ಗಿರಿಜ







ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೭೬

CHOWDAMMANA JATRE : By G. Girija. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.

---



**ಸಂಯೋಜನಾಧಿಕಾರಿ**
ಡಾ. ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು – ೫೬೦ ೦೦೪.



# ಚೌಡಮ್ಮನ ಜಾತ್ರೆ

ತುಂಬೆವೂ ನಂಗೆ ತುಂಬಿತಲ್ಲೆ ನಿನ್ನ ಪರಿಸೆ
ಕಡಲೆಕಾಯ್ ನಂಗೆ ಕಡಿತಲ್ಲೆ। ನಿನ್ನ ಪರಿಸೆ
ವರುಸಕ್ಕೊಂದು ಸತಿ ತುಂಬೀತು

ಮನುಷ್ಯನ ಇತಿಹಾಸ ದೊಡ್ಡದು. ಮನುಷ್ಯ ಜೀವ ಅನೇಕ ಯುಗಗಳನ್ನು ಕಂಡಿದೆ. ಮೂಲದಲ್ಲಿ ಕಾಡು ಮನುಷ್ಯನಾಗಿದ್ದವನು ಇಂದು ನಾಗರಿಕನಾಗಿದ್ದಾನೆ. ಅಂದರೆ ಕೇವಲ ಪ್ರಾಣಿಯಾಗಿದ್ದ ಮನುಷ್ಯ ಇಂದು ಮಾನವನಾಗಿದ್ದಾನೆ. ಮೊದಲಿಗೆ ಆಹಾರವನ್ನು ಸಂಗ್ರಹಿಸಿ ಮನುಷ್ಯ ಬದುಕಿದ. ನಂತರ ಬೇಟೆಯನ್ನು ಕಂಡುಕೊಂಡ. ಪ್ರಾಣಿಗಳನ್ನು ತಿಂದು ಬದುಕಿದ. ಅನಂತರ ಪ್ರಾಣಿಗಳನ್ನು ಸಾಕಲು ಕಲಿತ. ಇದೇ ಪ್ರಾಣಿಗಳನ್ನು ಬಳಸಿಕೊಂಡು ಬೇಸಾಯವನ್ನು ಕಲಿತ. ಬೇಸಾಯವನ್ನು ಕಲಿತ ಮೇಲೆ ಒಂದು ಕಡೆ ನೆಲೆ ನಿಂತ. ಹೀಗೆ ಹಲವಾರು ಹಂತಗಳನ್ನು ದಾಟಿ ಬೇಸಾಯ ಕಲಿತದ್ದು ಒಂದು ಇತಿಹಾಸ. ಹೀಗೆ ಒಂದು ಕಡೆ ನೆಲೆ ನಿಂತ ಮೇಲೆ ಹಟ್ಟಿಗಳು, ಹಾಡಿಗಳು ಮತ್ತು ಕೊಪ್ಪಗಳು ನಿರ್ಮಾಣವಾದವು. ಅನಂತರ ಹಳ್ಳಿಗಳು ಮತ್ತು ಊರುಗಳು ನಿರ್ಮಾಣವಾದವು. ಇಂದು ಪೇಟೆ, ಪಟ್ಟಣಗಳು ಕೂಡ ನಿರ್ಮಾಣಗೊಂಡಿವೆ.

ಹೀಗೆ ಮನುಷ್ಯರು ಗುಂಪಾಗಿ ನಿಂತ ಮೇಲೆ ಅವರ ನಡುವೆ ಹಲವು ಸಂಬಂಧಗಳು ಬೆಳೆದವು.

ಮೊದಲಿಗೆ ತನ್ನ ಸುತ್ತ ಇರುವ ಪರಿಸರವೇ ಅವನಿಗೆ ದೇವರು. ಸೂರ್ಯ, ಚಂದ್ರ, ಆಕಾಶ, ಗುಡ್ಡ, ಬೆಟ್ಟ, ಮರ, ಗಿಡ ಇವೆಲ್ಲವನ್ನು ಪೂಜಿಸುತ್ತಿದ್ದ. ಬರಬರುತ್ತಾ ದೇವರ ಕಲ್ಪನೆ ಬೇರೆಯಾಯಿತು. ಭೋರೆಂಬ ಮಳೆ, ಗುಡುಗು-ಸಿಡಿಲು ಭೂಕಂಪ ಇತ್ಯಾದಿ ಘಟನೆಗಳು ಅವನನ್ನು ಭಯಭೀತವಾಗಿಸಿದವು. ರೋಗರುಜಿನಗಳು ಆತಂಕ ಹುಟ್ಟಿಸಿದವು. ಇವೆಲ್ಲವೂ ಯಾವುದೋ ಶಕ್ತಿಯ ಉಪಟಳ ಎಂದು ಜನ ಭಾವಿಸಿದರು. ಒಂದೊಂದು ರೋಗಕ್ಕೆ, ಒಂದೊಂದು ಅನಿಷ್ಟಕ್ಕೆ, ಒಂದೊಂದು ಕಷ್ಟಕ್ಕೆ, ಒಂದೊಂದು ಶಕ್ತಿಯನ್ನು ಜನ ಕಲ್ಪಿಸಿದರು. ಹಾಗೆಯೇ ಒಂದೊಂದು ದೇವರಿಗೆ ಒಂದೊಂದು ರೂಪ ಕೊಟ್ಟರು. ಹೀಗೆ ಹುಟ್ಟಿಕೊಂಡ ದೇವರುಗಳನ್ನು ಜನ ಪೂಜಿಸತೊಡಗಿದರು. ಬರಬರುತ್ತಾ ಒಂದೊಂದು ಊರಿಗೂ ಹಲವು ದೇವರುಗಳ ಉಗಮವಾಯಿತು.

ನಮ್ಮ ಹಳ್ಳಿಗಳನ್ನು ನೀವೆಲ್ಲಾ ನೋಡಿದ್ದೀರಿ. ಒಂದೊಂದು ಹಳ್ಳಿ, ಊರಿನಲ್ಲಿಯೂ ಹಲವಾರು ಇಂಥ ದೇವರುಗಳನ್ನು ಕಂಡಿದ್ದೀರಿ. ಅದರಲ್ಲಿಯೂ ಹೆಣ್ಣು ದೇವತೆಗಳೇ ಹೆಚ್ಚು. ಹೆಣ್ಣು ಸೃಷ್ಟಿಗೂ ಕಾರಣಳು. ಹೆಣ್ಣು ಮಾತೆ ಹೇಗೋ, ಹಾಗೆಯೇ ದೇವತೆ. ಒಲಿದರೆ ನಾರೀ, ಮುನಿದರೆ ಮಾರಿ. ಅವಳು ಸೌಮ್ಯರೂಪದವಳೂ ಹೌದು, ಉಗ್ರರೂಪದವಳೂ ಹೌದು. ಹೀಗೆ ತಾಯಿಯೇ ಪ್ರಧಾನವಾಗಿ ಇದ್ದ ನಮ್ಮ ಸಮಾಜದಲ್ಲಿ ಹೆಣ್ಣು ದೇವತೆಗಳ ಉಗಮ ಹೆಚ್ಚಾಗಿಯೇ ಆಯಿತು.

ನಮ್ಮ ಅನೇಕ ಊರುಗಳಲ್ಲಿ ಇರುವ ದೇವತೆಗಳ ಹೆಸರುಗಳನ್ನು ನೋಡಿ. ಮಾರಮ್ಮ, ದಂಡಿನ ಮಾರಮ್ಮ, ಉರಿಮಾರಮ್ಮ, ಮಂಕಮ್ಮ, ಮಂಚಮ್ಮ, ಉಚ್ಚಮ್ಮ,

ಕಾಳಮ್ಮ, ಚೌಡಮ್ಮ, ಪಟಲದಮ್ಮ, ಗಂಗಮ್ಮ, ಗುಡ್ಡದಮ್ಮ, ಗಿಡದಮ್ಮ, ಹುಲಿಗೆವ್ವ, ದ್ಯಾಮವ್ವ, ಎಲ್ಲವ್ವ ಇತ್ಯಾದಿಯಾಗಿ ನೂರಾರು ಗ್ರಾಮದೇವತೆಗಳನ್ನು ನಾವು ನೋಡಬಹುದು. ಇಂಥ ಗ್ರಾಮದೇವತೆಗಳಲ್ಲಿ ಚೌಡಮ್ಮನೂ ಒಂದು. ಚೌಡಿ ಎಂದರೆ ಕುಪಿತಗೊಂಡವಳು, ಕೋಪಗೊಂಡವಳು, ಉಗ್ರರೂಪಿ ಎಂಬ ಅರ್ಥವೂ ಇದೆ. ಚೌಡಿ ಚಾಮುಂಡಿಯಾಗಿ ಕಾಣಿಸಿಕೊಂಡ ಕಥೆಗಳೂ ಇವೆ. ಒಟ್ಟಿನಲ್ಲಿ ಚೌಡಮ್ಮ ದುಷ್ಟರನ್ನು ಶಿಕ್ಷಿಸುವ, ಮೊರೆ ಬಿದ್ದವರನ್ನು ಕಾಪಾಡುವ ದೇವತೆ ಎಂದು ಜನ ನಂಬಿದ್ದಾರೆ.

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕಿನ ಉಜ್ಜನಿ ಎಂಬ ಗ್ರಾಮದಲ್ಲಿ ಚೌಡಮ್ಮನ ಗುಡಿ ಇದೆ. ಈ ಚೌಡಮ್ಮನಿಗೆ ವರ್ಷಕ್ಕೊಂದು ಹಬ್ಬ ನಡೆಯುತ್ತದೆ. ಹಬ್ಬದಲ್ಲಿ ನೂರಾರು ಆಚರಣೆಗಳನ್ನು ಮಾಡುತ್ತಾರೆ. ಈ ಎಲ್ಲ ಆಚರಣೆಗಳ ಮೊತ್ತವನ್ನು ಜಾತ್ರೆ ಎಂದು ಕರೆಯುತ್ತಾರೆ.

ಇಂಥ ಹಬ್ಬ ಜಾತ್ರೆಗಳು ಎಲ್ಲ ದೇವತೆಗಳಿಗೂ ನಡೆಯುತ್ತದೆ. ಆ ಎಲ್ಲ ದೇವತೆಗಳ ವಿಚಾರಗಳನ್ನು ಇಲ್ಲಿ ಹೇಳುವುದು ಸಾಧ್ಯವಿಲ್ಲ. ಚೌಡಮ್ಮನ ಜಾತ್ರೆಯ ವಿವರಗಳನ್ನು ಇಲ್ಲಿ ಹೇಳಲಾಗಿದೆ. ಈ ಮೂಲಕ ಗ್ರಾಮದೇವತೆಗಳ ಜಾತ್ರೆಗಳು ಯಾವ ರೀತಿಯಲ್ಲಿ ನಡೆಯುತ್ತವೆ ಎಂದು ನೀವು ತಿಳಿಯಬಹುದು.

## ಜಾತ್ರೆಗಳು ಏಕೆ ನಡೆಯುತ್ತವೆ?

'ಕಾಯಕವೇ ಕೈಲಾಸ' ಎಂಬುದು ದುಡಿಯುವ ಜನರ ಮಂತ್ರ. ರೈತ ಇಡೀ ವರ್ಷ ದುಡಿಯುತ್ತಾನೆ. ದುಡಿಮೆಯಲ್ಲೇ ಸತ್ಯವನ್ನು ಕಾಣುತ್ತಾನೆ. ಎಷ್ಟು ದುಡಿದರೂ ಬಡತನದಲ್ಲೇ ಬದುಕು ನೀಸುತ್ತಾನೆ. ಸಾಮಾನ್ಯವಾಗಿ ಮಳೆಗಾಲದಲ್ಲಿ ಅವನಿಗೆ ಬಿಡುವು ಇರುವುದಿಲ್ಲ. ಬೇಸಿಗೆಯಲ್ಲಿ ಬಿಡುವು ಸಿಗುತ್ತದೆ. ಕಣದ ಕೆಲಸ

ಮುಗಿದು ದವಸಧಾನ್ಯ ಮನೆ ತುಂಬುತ್ತವೆ. ಮುಂಗಾರಿನ ಮಳೆ ಇನ್ನು ಆರಂಭವಾಗಿರುವುದಿಲ್ಲ. ಸುಗ್ಗಿಯ ಈ ಸಮಯ ಹಬ್ಬ ಆಚರಿಸಲು, ಜಾತ್ರೆ ಮಾಡಲು ಸರಿಯಾದುದಾಗಿರುತ್ತದೆ.

ಇಂಥ ಜಾತ್ರೆಗಳು ಯಾಕಾಗಿ ನಡೆಯುತ್ತವೆ? ವರ್ಷಕ್ಕೆ ಒಂದು ಸಲ ಹೀಗೆ ಸೇರುವ ಅಗತ್ಯವಾದರೂ ಏನು? ಇದರಲ್ಲಿ ಎರಡು ಉದ್ದೇಶಗಳಿವೆ.

ಮೊದಲನೆಯ ಉದ್ದೇಶ ದೇವರನ್ನು ಆರಾಧಿಸುವುದು. ಎರಡನೆಯ ಉದ್ದೇಶ ಕೂಡಿ ಬಾಳುವುದು. ಹೀಗೆ ಆರಾಧನೆ ಮತ್ತು ಕೂಡಿ ಬಾಳುವ ಉದ್ದೇಶವೇ ಜಾತ್ರೆ ನಡೆಯಲು ಕಾರಣವಾಯಿತು. ಇಂಥ ಜಾತ್ರೆಗೆ ಸಾಮಾನ್ಯವಾಗಿ ಏಳು ಊರುಗಳ ಜನ ಸೇರುತ್ತಾರೆ. ಒಂದೊಂದು ಊರಿನವರು ಒಂದೊಂದು ಕೆಲಸ ವಹಿಸಿಕೊಳ್ಳುತ್ತಾರೆ. ಇಂಥ ಸಂದರ್ಭದಲ್ಲಿ ಸಾಮೂಹಿಕ ಅಡಿಗೆ, ಸಾಮೂಹಿಕ ಕುಣಿತ ಇತ್ಯಾದಿಯಾಗಿ ಕೂಡಿಬಾಳುವ ಬದುಕು ಕಾಣುತ್ತದೆ. ಈ ಮೂಲಕ ಒಬ್ಬರನ್ನೊಬ್ಬರು ಅರಿತುಕೊಳ್ಳಲು ಅನುಕೂಲವಾಗುತ್ತದೆ. ಕಷ್ಟಸುಖಗಳ ವಿನಿಮಯವಾಗುತ್ತದೆ. ವೈವಾಹಿಕ ಸಂಬಂಧಗಳು ಏರ್ಪಡುತ್ತದೆ. ಆ ಮೂಲಕ ಮನುಷ್ಯ ಸಂಬಂಧ ನಿರಂತರವಾಗುತ್ತದೆ. ಇದಕ್ಕೆಲ್ಲ ಒಂದು ದೇವತೆ, ಒಂದು ಜಾತ್ರೆ ಕಾರಣವಾಗುತ್ತದೆ.

## ಉಜ್ಜನಿ ಚೌಡಮ್ಮನ ಜಾತ್ರೆ

ಈಗ ಉಜ್ಜನಿ ಚೌಡಮ್ಮನ ಜಾತ್ರೆಯ ವಿಚಾರಕ್ಕೆ ಬರೋಣ. ಚೌಡಮ್ಮ ಉಜ್ಜನಿಯ ದೇವತೆ ಹೇಗಾದಳು? ಪೂಜೆ ಪುನಸ್ಕಾರ ಹಬ್ಬ ಜಾತ್ರೆಗಳು ಹೇಗೆ ಆರಂಭವಾದವು? ಇಂಥ ವಿಚಾರಗಳನ್ನು ಮೊದಲು ತಿಳಿದುಕೊಳ್ಳೋಣ. ಅಲ್ಲಿಯ ಜನ ಇದಕ್ಕೆಲ್ಲ ಒಂದೊಂದು ಕಥೆ ಹೇಳುತ್ತಾರೆ. ಈ ಕಥೆಗಳು ನಿಜವೋ, ಸುಳ್ಳೋ

ಎಂದು ಪರೀಕ್ಷೆ ಮಾಡಲು ಸಾಧ್ಯವಿಲ್ಲ. ದೇವರ ಮೇಲಿನ ಭಕ್ತಿ ಮತ್ತು ಪ್ರೀತಿ ಇಂಥ ಕಥೆಗಳಿಗೆ ಕಾರಣವಾಗುತ್ತವೆ.

## ಚೌಡಮ್ಮ ಉಜ್ಜೈನಿಗೆ ಬಂದು ನೆಲಸಿದ ಕಥೆ

ಉಜ್ಜನಿ ಚಂದ ಉಣಸೆ ತೋಪು ಚಂದ
ಉಜ್ಜನಿ ಅಮ್ಮನ ಗುಡಿ ಚಂದ। ಮ್ಯಾಲಿರುವ
ನೌಲಿಂಡ ಯಾರೆ ಬರೆದೋರು

ತ್ರಿಪುರಾಪುರಿ ಎಂಬುದು ಒಂದು ಪಟ್ಟಣ. ಅದು ಭೂಮಿಯಲ್ಲೂ ಇಲ್ಲ, ಆಕಾಶದಲ್ಲೂ ಇಲ್ಲ. ಮಧ್ಯೆ ತೂಗಾಡುವ ಪಟ್ಟಣ. ತ್ರಿಪುರಾ ಎಂಬುವನು ಅಲ್ಲಿಗೆ ರಾಜ. ಅವನಿಗೆ ಏಳು ಜನ ಹೆಣ್ಣುಮಕ್ಕಳು. ಅವರೆಲ್ಲ ತುಂಬ ಸುಂದರಿಯರು. ಆದರೆ ಎಂದೂ ಗಂಡಸರ ಮುಖವನ್ನೇ ಕಾಣದವರು. ಇವರಿಗೆ ಹೇಗಾದರೂ ಮಾಡಿ ಗಂಡಸರ ದರುಶನ ಮಾಡಿಸಬೇಕು ಎಂದು ಶ್ರೀಕೃಷ್ಣ ಯೋಚಿಸಿದ. ಅದಕ್ಕೆ ಒಂದು ಉಪಾಯ ಮಾಡಿದ. ಅವನು ಬುಡಬುಡುಕೆಯ ವೇಷವನ್ನು ಹಾಕಿಕೊಂಡ. ತ್ರಿಪುರಾಪುರಿ ಪಟ್ಟಣವನ್ನು ನಡುರಾತ್ರಿಯಲ್ಲಿ ಪ್ರವೇಶಿಸಿದ. ತ್ರಿಪುರಾಪುರಿ ಪಟ್ಟಣಕ್ಕೆ ವಿಪತ್ತು ಬಂದಿದೆ ಎಂದು ಸಾರಿದ. ಈ ವಿಪತ್ತಿನಿಂದ ಪಾರಾಗಬೇಕಾದರೆ ಏನು ಮಾಡಬೇಕು? ನಡುರಾತ್ರಿಯಲ್ಲಿ ತ್ರಿಪುರನ ಏಳು ಜನ ಹೆಣ್ಣುಮಕ್ಕಳು ಹುಬ್ಬದ ನಿರ್ವಾಣ ಕೆರೆಯಲ್ಲಿ ಸ್ನಾನ ಮಾಡಬೇಕು. ಸ್ನಾನ ಮಾಡಿದ ನಂತರ ಅಲ್ಲಿರುವ ಅರಳೀ ಸಸಿಯನ್ನು ಬೆತ್ತಲೆಯಾಗಿ ತಬ್ಬಬೇಕು. ಹೀಗೆ ಮಾಡದಿದ್ದರೆ ಪಟ್ಟಣ ಹಾಳಾಗುತ್ತದೆ ಎಂದು ಸಾರಿ ಮಾಯವಾಗುತ್ತಾನೆ. ಇದರಿಂದ ಪುರದ ಜನರೆಲ್ಲ ಗಾಬರಿಯಾದರು. ಏಳು ಜನ ಹೆಣ್ಣುಮಕ್ಕಳು ಕೆರೆಯಲ್ಲಿ ಸ್ನಾನ ಮಾಡಲು ನಿರ್ಧರಿಸಿದರು. ರಾತ್ರಿ ಸರಿಹೊತ್ತಿನಲ್ಲಿ ಮೂಡಲಲ್ಲಿ ಇರುವ ಕೆರೆಗೆ ಹೋದರು. ತಮ್ಮ ಬಟ್ಟೆ ಮತ್ತು ಆಭರಣಗಳನ್ನು ತೆಗೆದು ಇಟ್ಟು ಸ್ನಾನ ಮಾಡಿದರು. ಅನಂತರ ಅರಳೀ

ಸಸಿಗೆ ಪೂಜೆ ಆರಂಭಿಸಿದರು. ಅವರು ಪೂಜೆ ಮಾಡುತ್ತಿದ್ದಂತೆಯೇ ಅರಳೀ ಸಸಿ ದೊಡ್ಡದಾಗಿ ಬೆಳೆಯಿತು. ಏಳು ಜನರೂ ಕೈಕಟ್ಟಿ ಅದನ್ನು ತಬ್ಬಿದರು.



**ಚೌಡಮ್ಮನ ಮೂರ್ತಿ**

ಅಷ್ಟರಲ್ಲಿ ಅರಳೀಮರ ಮಾಯವಾಗಿ ಶ್ರೀಕೃಷ್ಣ ಅಲ್ಲಿ ನಿಂತಿದ್ದ. ಏಳು ಜನ ತರುಣಿಯರಿಗೂ ಒಮ್ಮೆಗೆ ಮಾನಭಂಗವಾಯಿತು. ಹೀಗೆ ಮಾನಭಂಗವಾದ ಮೇಲೆ ಪಟ್ಟಣದಲ್ಲಿ ಇರುವುದು ಸರಿಯಲ್ಲ ಎಂದು ಅವರು ಭಾವಿಸಿದರು. ಏಳು ಜನರು ಭೂಲೋಕದ ಕಡೆಗೆ ಪ್ರಯಾಣ ಬೆಳೆಸಿದರು. ಅವರಲ್ಲಿ ಹಿರಿಯಳು ಚೌಡಮ್ಮನ

ರೂಪದಲ್ಲಿ ಉಜ್ಜನಿಯಲ್ಲಿ ಬಂದು ನೆಲಸಿದಳು. ಅಲ್ಲಿನ ಜನರ ನಂಬಿಕೆಯ ಪ್ರಕಾರ ಚೌಡಮ್ಮ ಈಗಲೂ ತ್ರಿಪುರಾಪುರಕ್ಕೆ ಹೋಗಿ ಬರುತ್ತಾಳೆ.

ಅಪರಂಜಪರಂಜಿ ತ್ರಿಪುರದ ಸುಣ್ಣಕಾಯಿ
ಮಕರಂಬೆ ಕುದುರೆ ಬಲಗೈಲಿ ಇಡಕೊಂಡು
ತ್ರಿಪುರಾಕೆ ದಂಡ ತಿರುಗಾಳೆ.

## ಚೌಡಮ್ಮನ ಹಬ್ಬವನ್ನು ಪ್ರಾರಂಭ ಮಾಡಿದ ಕಥೆ

ಚಿಕ್ಕನಾರಸೀಗೌಡ ಮತ್ತು ದೊಡ್ಡನಾರಸೀಗೌಡ ಎಂಬ ಇಬ್ಬರು ಅಣ್ಣ ತಮ್ಮಂದಿರು ವಿಜಯನಗರದ ರೈತರು. ಅಲ್ಲಿ ಮಳೆ ಬೆಳೆ ಸರಿಯಾಗಿ ಆಗದೆ



**ನರಸೇಗೌಡನಿಗೆ ಬಿದ್ದ ಕನಸು**

ದಕ್ಷಿಣಕ್ಕೆ ವಲಸೆ ಹೊರಡುತ್ತಾರೆ. ಹೀಗೆ ಬರುತ್ತಿರುವಾಗ ಸಂಜೆಯಾಯಿತು. ಒಂದು ಕಡೆ ಎತ್ತುಗಾಡಿಗಳನ್ನು ಬಿಟ್ಟು ಅಡಿಗೆ ಮಾಡಲು ಆರಂಭಿಸಿದರು. ಅವರು ಗಾಡಿ ಬಿಟ್ಟ ನೆಲದಲ್ಲಿ ಮಣ್ಣು ಮುಟ್ಟಿದರೂ ಹೊನ್ನಾಗುತ್ತಿತ್ತು. ಇದರ ಮಹಿಮೆ ಏನು ಎಂದು ಗೌಡರು ಆಶ್ಚರ್ಯಪಟ್ಟರು.



**ಚೌಡಮ್ಮನ ಗುಡಿ**

ಅಂದು ರಾತ್ರಿ ಅವರ ಕನಸಿನಲ್ಲಿ ದೇವಕನ್ನೆ ಚೌಡಮ್ಮ ಅಲ್ಲಿ ನೆಲೆಸಿರುವ ವಿಚಾರ ಗೊತ್ತಾಯಿತು. ಆಗ ವಲಸೆ ಬಂದಿದ್ದ ಈ ಭಕ್ತರು ಚೌಡಮ್ಮನ ಮೊರೆ ಬಿದ್ದರು. ಅಲ್ಲಿಯೇ ನೆಲೆ ನಿಂತರು. ಚೌಡಮ್ಮನ ಒಕ್ಕಲು ಮಕ್ಕಳಾದರು. ಬೇಕಾದಷ್ಟು

ಸಿರಿವಂತರೂ ಆದರು. ಪ್ರತಿ ವರ್ಷ ಚೌಡಮ್ಮನ ಹಬ್ಬವನ್ನು ಆರಂಭಿಸಿದರು. ಚೌಡಮ್ಮನ ಹಬ್ಬಕ್ಕೆ ಬರುವ ಜನರಿಗಾಗಿ ದೊಡ್ಡನಾರಸೀಗೌಡ ದೊಡ್ಡ ಕೆರೆಯನ್ನು, ಚಿಕ್ಕನಾರಸೀಗೌಡ ಚಿಕ್ಕ ಕೆರೆಯನ್ನು ಕಟ್ಟಿಸಿದರು.

ಊರ ಮುಂದಲ ಕೆರೆ ನೀರೆಲ್ಲ ತಾವರೆ
ನೋಡೆ ಚೌಡಮ್ಮ ನಿನ್ನ ಕೆರೆ! ಚಿಕ್ಕೆರೆಯ
ಜೂಜಾಡಿ ಕೋಡಿ ಅರಿದಾವು.

## ಚೌಡಮ್ಮನ ಹಬ್ಬ ಮತ್ತು ಜಾತ್ರೆ

ಸಾಮಾನ್ಯವಾಗಿ ಯುಗಾದಿ ಕಳೆದ ನಂತರ ಚೌಡಮ್ಮನ ಹಬ್ಬ ನಡೆಯುತ್ತದೆ. ಯುಗಾದಿಯ ಮರುದಿನವೇ ಊರ ಪಂಚಾಯತಿ ಕಟ್ಟೆಯಲ್ಲಿ ಏಳು ಊರ ಮುಖ್ಯಸ್ಥರು ಸಭೆ ಸೇರುತ್ತಾರೆ. ಹಬ್ಬವನ್ನು ಹೇಗೆ ಹೇಗೆ ಮಾಡಬೇಕು ಎಂದು ಚರ್ಚೆ ಮಾಡುತ್ತಾರೆ. ಯಾವ ಯಾವ ಊರಿನವರಿಗೆ ಯಾವ ಯಾವ ಕೆಲಸ, ಯಾವ ಯಾವ ಪಂಗಡಗಳಿಗೆ ಯಾವ ಯಾವ ಕೆಲಸ ಎಂಬುದನ್ನು ಹಿರಿಯರು ತೀರ್ಮಾನಿಸುತ್ತಾರೆ. ಚೌಡಮ್ಮನ ಜಾತ್ರೆಯನ್ನು ಏಳು ಭಾಗಗಳಾಗಿ ವಿಂಗಡಿಸಬಹುದು.

೧) ಕಂಬ ಹಾಕುವುದು (೨) ಕಂಬ ಇಕ್ಕಿದ ದಿನದಿಂದ ಆರತಿ ದಿನದವರೆಗೆ ಸುಮಾರು ಹನ್ನೊಂದು ಅಥವಾ ಹದಿಮೂರು ದಿನಗಳು (೩) ಆರತಿ (೪) ಅಗ್ನಿಕೊಂಡ (೫) ತೇರು (೬) ಉತ್ಸವ (೭) ಹೆಬ್ಬಾರೆ ಕಣ್ಣುಬಿಚ್ಚುವುದು.

### ಕಂಬ ಹಾಕುವುದು

ಕಂಬ ಇಕ್ಕುವುದು ಎಂದರೆ ಹಬ್ಬದ ಪ್ರಾರಂಭ ಎಂದು ಅರ್ಥ. ಹಬ್ಬ ಇನ್ನು ಹದಿಮೂರು ದಿನಗಳು ಇದೆ ಎನ್ನುವಾಗಲೇ ಈ ಕಂಬ ಇಕ್ಕುವ ಕಾರ್ಯ

ನಡೆಯುತ್ತದೆ. ಅಂದರೆ ಆ ಮುಂದಿನ ಹದಿಮೂರು ದಿನಗಳ ಕಾಲ ಜಾತ್ರೆಯ ಸಿದ್ಧತೆಗಳು ನಡೆಯುತ್ತವೆ ಎಂದರ್ಥ.



ಕಂಬ ಹಾರುವುದು

ಊರಿನ ಆಚೆಯ ಬಯಲಿಗೆ ಹೋಗಿ ಮೂರು ಕವಲುಗಳ ಹತ್ತಿಮರದ ಕೊನೆಯನ್ನು ಕಡಿಯುತ್ತಾರೆ. ಅದಕ್ಕೆ ಅರಿಶಿಣ ಕುಂಕುಮವಿಟ್ಟು ಪೂಜಿಸುತ್ತಾರೆ. ಅದನ್ನು ಚೌಡಮ್ಮನ ದೇವಸ್ಥಾನಕ್ಕೆ ತಂದು ಅಲ್ಲಿ ಇನ್ನೊಮ್ಮೆ ಪೂಜಿಸುತ್ತಾರೆ. ಆ ನಂತರ ಊರ ಹೆಬ್ಬಾಗಿಲಿನಲ್ಲಿ ಈ ಕಂಬವನ್ನು ನೆಡುತ್ತಾರೆ. ಇದರ ಅರ್ಥ ಹಬ್ಬ ಆರಂಭವಾಯಿತು ಎಂದು.

ಇದೇ ದಿನ ಇನ್ನು ಹಲವಾರು ಕಾರ್ಯ ಕ್ರಮಗಳು ಜರುಗುತ್ತವೆ. ಮುಂದೆ ಏರ್ಪಾಟು ಆಗಲಿರುವ ಕೊಂಡದಲ್ಲಿ ಓಡುವ ಅನೇಕ ಗುಡ್ಡರು ಇದೇ ದಿನ ದೇವಸ್ಥಾನದಲ್ಲಿ ಸೇರುತ್ತಾರೆ. ಇವರೆಲ್ಲರೂ ಅಂದಿನಿಂದ ಹದಿಮೂರು ದಿನಗಳವರೆಗೆ ಮಡಿಯಲ್ಲಿ ಇರಬೇಕಾಗುತ್ತದೆ. ಮನೆಗಳಿಗೆ ಹೋಗುವ ಹಾಗಿಲ್ಲ. ಒಕ್ಕಲಿಗ ಜನಾಂಗದ ಉಜ್ಜನಿ ಚೌಡಮ್ಮನ ಗುಡ್ಡ, ನಿಡಸಾಲೆ ಚೌಡಮ್ಮನ ಗುಡ್ಡ, ಕರಗ ಹೊರುವ ಗುಡ್ಡ, ಧೂಪದ ಹುಂಡಿ ಹೊರುವ ಗುಡ್ಡ ಇವರೆಲ್ಲ ಅಂದು ಹೊಸ ಬಟ್ಟೆ ತೊಟ್ಟು ಮಡಿಯಾಗುತ್ತಾರೆ. ಇವರ ಜೊತೆಗೆ ಇನ್ನೊಂದು ವಿಶೇಷ ಕಾರ್ಯಕ್ರಮವೂ ಇದೆ. ಅದೆಂದರೆ ಹರಿಜನರು ಬ್ರಾಹ್ಮಣರಂತೆ ಜನಿವಾರ ತೊಟ್ಟು "ಹೆಬ್ಬಾರೆ ಗುಡ್ಡ"ರಾಗುವುದು. ಹೆಬ್ಬಾರೆ ಎಂದರೆ ದೊಡ್ಡ ದೊಡ್ಡ ಚರ್ಮದ ವಾದ್ಯಗಳು. ಈ ವಾದ್ಯಗಳನ್ನು ಹೊತ್ತ ಆರು ಜನ ಗುಡ್ಡರು ಕೊಂಡದಲ್ಲಿ ಓಡಬೇಕು. ಉಜ್ಜನಿಯಲ್ಲಿ ಈ"ಹೆಬ್ಬಾರಮ್ಮ"ನಿಗಾಗಿ ಒಂದು ಗುಡಿ ಇದೆ. ಈ ಗುಡಿಯಲ್ಲಿ ಈ ಆರು ಜನ



**ಹೆಬ್ಬಾರೆ ಗುಡ್ಡರು**

ಗುಡ್ಡರು ಅಂದಿನಿಂದ ಸೇರಿಕೊಳ್ಳುತ್ತಾರೆ. ಅಂದಿನಿಂದ ಹಬ್ಬ ಮುಗಿಯುವವರೆಗೂ ಇವರಾರೂ ಮೈಲಿಗೆಯಾಗುವಂತಿಲ್ಲ.

## ಕಂಬ ಇಕ್ಕಿದ ದಿನದಿಂದ ಜಾತ್ರೆಗೆ ಸಿದ್ಧತೆ

ಕಂಬ ಇಕ್ಕಿದ ಮಾರನೆ ದಿನದಿಂದಲೇ ಹಬ್ಬ, ಜಾತ್ರೆಯ ಸಡಗರ ಆರಂಭವಾಗುತ್ತದೆ. ಮನೆಗಳಿಗೆ ಸುಣ್ಣಬಣ್ಣ ಹಾಕುತ್ತಾರೆ. ಚೌಡಮ್ಮನ ಗುಡಿಗೂ ಸುಣ್ಣ ಬಳಿಯುತ್ತಾರೆ. ಎಲ್ಲ ನೆಂಟರನ್ನೂ ಹಬ್ಬಕ್ಕೆ ಬರುವಂತೆ ಕರೆ ಕಳಿಸುತ್ತಾರೆ.

ಹಾಗಾಗಿ ಈ ಹಬ್ಬದಲ್ಲಿ ಯಾವ ನೆಂಟರನ್ನು ಬೇಕಾದರೂ ನೋಡಬಹುದು. ವೈರ, ದ್ವೇಷ, ಹಗೆ, ಹಠ ಎಲ್ಲವೂ ಈ ಹಬ್ಬದಲ್ಲಿ ಮಾಯವಾಗುತ್ತವೆ. ತೌರಿಗೆ ಹೆಣ್ಣುಮಕ್ಕಳು ಬರುವುದೇ ಒಂದು ಸಡಗರ.

ಮನೆಯ ಒಳಗೂ ಮಡಿ ಆರಂಭವಾಗುತ್ತದೆ. ಹಳೆ ಮಡಿಕೆಗಳ ಬದಲು ಹೊಸ ಮಡಿಕೆಗಳು ಬರುತ್ತವೆ. ಗಂಗೆ ಪೂಜಿಸುವ ಹೊಸ ಗಡಿಗೆಗಳು ಬರುತ್ತವೆ. ಆರತಿಗೆ ತಂಬಿಟ್ಟು ತುಂಬುವ ಹೊಸ ಪುಟ್ಟಿಗಳನ್ನು ತರಲಾಗುತ್ತದೆ. ಒಳಗೋಡೆಗಳಲ್ಲಿ ರಂಗುರಂಗಿನ ಚಿತ್ತಾರ ಕಾಣಿಸಿಕೊಳ್ಳುತ್ತದೆ. ಈ ಹದಿಮೂರು ದಿನಗಳ ಕಾಲವೂ



**ಕೋಲಾಟ**

ಊರ ಬಯಲಿನಲ್ಲಿ ರಂಗದ ಕುಣಿತ ನಡೆಯುತ್ತದೆ. ಪ್ರತಿದಿನ ರಾತ್ರಿ ಊರ ಯುವಕರೆಲ್ಲ ಸೇರುತ್ತಾರೆ. ಜವಳೆ ಕುಣಿತ, ಕೋಲಾಟ, ಹುಲಿ ಕರಡಿ ವೇಷ ಮುಂತಾಗಿ ಹಲವು ಕಲೆಗಳನ್ನು ಪ್ರದರ್ಶಿಸುತ್ತಾರೆ. ಏಳು ಊರುಗಳಲ್ಲಿಯೂ ಈ ಕಾರ್ಯಕ್ರಮ ನಡೆಯುತ್ತದೆ. ಹಬ್ಬದ ದಿನಗಳಲ್ಲಿ ಉಜ್ಜನಿಯ ಬಯಲಿನಲ್ಲಿ ಈ ಕಲೆಗಳ ಸ್ಪರ್ಧೆಯೇ ನಡೆಯುತ್ತದೆ. ಅಂದಿನ ಸ್ಪರ್ಧೆಗಾಗಿ ಈ ಹದಿಮೂರು ದಿನಗಳ ತಾಲೀಮು ಎಂದೇ ಕರೆಯಬಹುದು.

ಕಂಬ ಇಕ್ಕಿದ ಹನ್ನೆರಡನೆಯ ದಿನ ಸೋಮವಾರ ಚೌಡಮ್ಮನಿಗೆ ಆರತಿ. ಏಳು ಊರುಗಳ ಹೆಣ್ಣುಮಕ್ಕಳೂ ಸ್ವಾಮಿ ಹುಟ್ಟುವ ಮೊದಲೇ ಏಳುತ್ತಾರೆ. ಸ್ನಾನ ಮಾಡಿ ಮಡಿಬಟ್ಟೆ ತೊಟ್ಟುಕೊಳ್ಳುತ್ತಾರೆ. ಅಂದು ಅವರು ಮಾಡುವ ಕೆಲಸಗಳನ್ನು ಈ ಹಾಡಿನಿಂದಲೇ ತಿಳಿಯಬಹುದು.



ಕೆಂಬುತ್ತಿ ಬತ್ತ ತಂಬಿಟ್ಟಿಗದವಾದೋ
ಕುಂಬಾರ ಮನೆಯ ಹೊಸ ಮಡಿಕೆ ವೊಳೆಯ ನೀರು
ಆರುವರ ಚೌಡಮ್ಮನಿಗೆ ಅದವಾದೋ

ರಾತ್ರಿ ಹತ್ತು ಗಂಟೆಗೆ ಏಳೂರಿನ ಹೆಣ್ಣುಮಕ್ಕಳೂ ಆರತಿ ಹೊತ್ತು ಉಜ್ಜನಿಯ ಅಮ್ಮನ ಗುಡಿಗೆ ಹೊರಡುತ್ತಾರೆ. ಆರತಿ ಅಂದರೆ ಏನು? ಅದು ಹೇಗಿರುತ್ತದೆ? ಆರತಿ ಎಂದರೆ ತಂಬಿಟ್ಟಿನ ಎಡಿಗೆಯನ್ನು ದೀಪದಲ್ಲಿ ಬೆಳಗುವುದು. ಬಿದಿರಿನ ಪುಟ್ಟಿಗೆ ತಂಬಿಟ್ಟಿನ ಉಂಡೆ ಇಡುತ್ತಾರೆ. ತಂಬಿಟ್ಟಿನ ಮೇಲ್ಭಾಗವನ್ನು ಗುಳಿ ಮಾಡಿ ಎಣ್ಣೆ ತುಂಬುತ್ತಾರೆ. ಅರಳೆ ಬತ್ತಿಯನ್ನು ಹಾಕಿ ದೀಪ ಹೊತ್ತಿಸುತ್ತಾರೆ. ಅದರ ಸುತ್ತಲೂ ಹೊಂಬಾಳೆ (ಅಡಿಕೆಯ ಹೂ) ಜೋಡಿಸುತ್ತಾರೆ. ಬುಟ್ಟಿಗೆ ಕಣಗಲೆ ಹೂವಿನ ಮತ್ತು ಬೇವಿನ ಸೊಪ್ಪುಗಳನ್ನು ಸಿಕ್ಕಿಸಿ ಅಲಂಕರಿಸುತ್ತಾರೆ. ಹಳದಿ ಬಣ್ಣದ ಹೊಂಬಾಳೆ ದೀಪದ ಬೆಳಕಿಗೆ ಹೊಳೆಯುತ್ತದೆ. ಚಿನ್ನದ ಗರಿಯಂತೆ ಕಾಣಿಸುತ್ತದೆ.



ಆರತಿ



ಹಬ್ಬದ ಸಡಗರ

ಮಾತೆ ವೊಂಬಾಳೆ ಮಾಲಾವ ನಮ್ಮಲ್ಲಿ
ರಾಣೀ ಚೌಡಮ್ಮ ಆರತಿಯ। ವೊಂಬಾಳೆ
ಮಾಲಾವ ನಮ್ಮ ನಡುಮಲ್ಲಿ.

ಹೀಗೆ ಅಲಂಕರಿಸಿದ ಆರತಿಯನ್ನು ಏಳೂರಿನಿಂದಲೂ ಹೆಣ್ಣುಮಕ್ಕಳು ಹೊತ್ತು ನಡೆಯುತ್ತಾರೆ. ವಾದ್ಯ, ತಮಟೆ, ನಗಾರಿಗಳ ಸದ್ದು ಗಗನ ಮುಟ್ಟುತ್ತದೆ. ಅವರ ಹಿಂದೆ ಜವಳೆ ಕುಣಿತದವರು ನಗಾರಿಯ ಸದ್ದಿಗೆ ಹೆಜ್ಜೆ ಹಾಕುತ್ತಾರೆ. ಈ ಸೊಗಸನ್ನು ಅಲ್ಲಿನ ಜನ ಹೇಗೆ ವರ್ಣಿಸಿದ್ದಾರೆ ನೋಡಿ.

ಸೊಸೆಯರಾರುತೀ ಎಸಳು .ಚಿಕ್ಕದಂದು
ಮುಂದೆ ಬರುವಾಗ ಯೆಣ್ಣು ಮಕ್ಕು। ಆರುತಿ
ಮುಂಗಾರು ಮಿಂಚಿನಂಗೆ ವೊಳೆದಾವೆ

ಏಳೂರ ಆರತಿಗಳು ಗುಡಿಯ ಬಯಲಿನಲ್ಲಿ ಸೇರುತ್ತವೆ. ಹಾಡು, ಕುಣಿತಗಳು ಸ್ಪರ್ಧೆಯಿಂದ ನಡೆಯುತ್ತವೆ. ದೇವಸ್ಥಾನದ ಒಳಗೆ ಹೆಣ್ಣುಮಕ್ಕಳಿಗೆ ತೀರ್ಥ ಹಾಕಿದ ನಂತರ ಆರತಿ ಕಾರ್ಯಕ್ರಮ ಮುಗಿಯುತ್ತದೆ.

**ಅಗ್ನಿಕೊಂಡ**

ಮಾರನೇ ಮಂಗಳವಾರ ಕೊಂಡದ ಕಾರ್ಯಕ್ರಮ. ಚೌಡಮ್ಮನ ಗುಡಿಯ ಮುಂದೆ ದೊಡ್ಡ ಹಳ್ಳ ತೆಗೆಯಲಾಗುತ್ತದೆ. ಬೆಳಗಿನಿಂದಲೇ ಏಳೂರ ಕೊಂಡದ ಸೌದೆಗಳು ಬರುತ್ತವೆ. ಸುತ್ತಮುತ್ತಲ ಕಾಡುಗಳಲ್ಲಿ ಸಿಗುವ ಜಾತಿ ಮರಗಳನ್ನು ಕತ್ತರಿಸಿ ತರುತ್ತಾರೆ.

ಅಣ್ಣತಮ್ಮದೀರು ವೊನ್ನೆ ಬೆಟ್ಟಕೆ ವೋಗಿ
ಚನ್ನಂಗಿ ಮರವ ಬೆವರಡ್ಡಿ! ಕಡದಾರಲ್ಲೆ
ಕನ್ನೆ ಚೌಡಮ್ಮ ಕದಲೀಗೆ.



ಮಂಗಳವಾರ ಹೊತ್ತು ಮೂಡುವ ಮೊದಲೇ ಗಂಡು ಮಕ್ಕಳು ಏಳುತ್ತಾರೆ. ಚಂದದ ಎತ್ತುಗಳನ್ನು ಮೈತೊಳೆದು ಮಡಿ ಮಾಡುತ್ತಾರೆ. ಕೊಂಬಿಗೆ ಕಳಸ ಕೊರಳಿಗೆ ಮಾಲೆ ಹಾಕಿ ಅಲಂಕರಿಸುತ್ತಾರೆ. ನೊಗಕ್ಕೆ ವಿವಿಧ ಬಗೆಯ ಸೌದೆಯ ಹೊರೆಯನ್ನು ಕಟ್ಟುತ್ತಾರೆ. ಹೀಗೆ ಅಲಂಕರಿಸಿದ ಕೊಂಡದ ಸೌದೆಗಳನ್ನು ಹೇರುಗಳಂತೆ ಕಟ್ಟಿ ಒಡೆದುಕೊಂಡು ಬರುತ್ತಾರೆ. ಇಂಥ ನೂರಾರು ಕೊಂಡದ ಸೌದೆಗಳು ಏಳೂರಿನಿಂದಲೂ ಬರುತ್ತವೆ. ಹಾಗೇ ಹೊರಡುವ ಚಂದ ಹೇಗಿರುತ್ತದೆ ಎಂದರೆ

ಕೊಂಡೆಸೌದೆ ಬರುವಾಗ ತುಂಡೆಕ್ಕ ಚಂದ ನೋಡಿ
ಕೊಂಬೀಗೆ ಕಳಸ ಕೊರಳೀಗೆ! ವೂವಿನ ಮಾಲೆ
ಬಂದವಲ್ಲೆ ಚೌಡಮ್ಮ ಬಲದಲ್ಲಿ

ಗುಡಿಯ ಬಯಲಿಗೆ ಸೇರುವವರೆಗೂ ಎತ್ತುಗಳನ್ನು ಓಡಿಸುತ್ತಾರೆ. ಈ ಸಾಹಸ ಕೆಲವು ಸಲ ಪ್ರಾಣಕ್ಕೂ ಸಂಚಕಾರ ತರುತ್ತದೆ. ಹೇರುಗಳು ಗುಡಿಯನ್ನು ಮೂರು ಬಾರಿ ಸುತ್ತಿ ಸೌದೆಗಳನ್ನು ಬಿಡುತ್ತದೆ. ಈ ಸಂದರ್ಭದಲ್ಲಿ ಗುಡಿಯ ಸುತ್ತ ಕೆಂಧೂಳು ಏಳುತ್ತದೆ.



**ಅಗ್ನಿಕೊಂಡ**

ಸಂಜೆ ಆರು ಘಂಟೆಗೆ ಕೊಂಡಕ್ಕೆ ಬೆಂಕಿ ಹಾಕುವ ಕಾರ್ಯಕ್ರಮ. ರಾತ್ರಿಗೆ ಈ ಅಗ್ನಿಕೊಂಡದಲ್ಲಿ ಓಡಬೇಕಾದ ಗುಡ್ಡರು ಅಲ್ಲಿ ಸೇರುತ್ತಾರೆ. ಚೌಡಮ್ಮನನ್ನು ಪೂಜಿಸಿ ಸಾವಿರಾರು ಜನರ ಸಮ್ಮುಖದಲ್ಲಿ ಬೆಂಕಿ ಹಾಕಲಾಗುತ್ತದೆ. ಒಂದು ಕರ್ಪೂರದ ಉರಿಯಂತೆ ಕಾಣಿಸಿಕೊಳ್ಳುವ ಬೆಂಕಿ ನಂತರ ತನ್ನ ಕೆನ್ನಾಲಗೆಯನ್ನು ಚಾಚುತ್ತದೆ.

ಸುಮಾರು ಮಧ್ಯರಾತ್ರಿಯ ವೇಳೆಗೆ ಕೊಂಡದ ಕೆಗ್ಗುರಿ ಏಳೂರಿಗೂ ಕಾಣುತ್ತದೆ. ಸೌದೆಗಳ ಚಟಪಟ ಸದ್ದು ಭಕ್ತರ ಕಿವಿಯನ್ನು ತುಂಬುತ್ತದೆ. ನೆರೆದ

ಸಾವಿರಾರು ಜನ ಈ ಸೋಜಿಗವನ್ನು ನೋಡಿ ದಂಗಾಗುತ್ತಾರೆ. ಈ ಸಮಯದಲ್ಲಿ ಸೌದೆಗಳು ಬೆಂಕಿಯ ರಸವನ್ನೇ ಉಗಿಯುತ್ತವೆ.

ಅಸಿಯಾ ಕಗ್ಗಲಿ ಸೌದೆ ರಸಬುಟ್ಟಿ ಬೇಯುವಾಗ
ನಿನ್ನ ಸುಮಕ್ಕೂ ಕೊಂಡಾಕೆ ಬರುವಾಗ। ಚೌಡಮ್ಮ
ರಸವಾ ಮುಕ್ಕಳಿಸಿ ಉಗುದಾಳೆ.

ಉರಿದು ಉರಿದು ಕೆಂಡದ ರಾಶಿ ಬೀಳುತ್ತದೆ. ಈ ರಾಶಿಯನ್ನು ಕೊಂಡದ ಹಳ್ಳದಲ್ಲಿ ಸರಿಯಾಗಿ ಹರಡುತ್ತಾರೆ. ಮಾರನೆಯ ಬೆಳಗಿನ ಜಾವ ಸುಮಾರು ನಾಲ್ಕು ಗಂಟೆಗೆ ಕೊಂಡ ಹಾಯುವ ಕಾರ್ಯಕ್ರಮ. ಸುಮಾರು ಅರವತ್ತು ಅಡಿ ಉದ್ದ ಹಾಗೂ ಐದು ಅಡಿ ಆಳಕ್ಕೆ ತುಂಬಿ ನಿಂತ ಕೆಂಡವನ್ನು ತುಳಿಯುತ್ತಾ ಗುಡ್ಡರು ಓಡಬೇಕು. ಅಲ್ಲಿ ನೆರೆದ ಸಾವಿರಾರು ಜನಕ್ಕೆ ಇದೊಂದು ಸೋಜಿಗ. ಮೊಟ್ಟಮೊದಲು ಧೂಪುಂಡಿಗೆ ಗುಡ್ಡನ ಸರದಿ, ಅವನ ಹಿಂದೆ ಚೊಂಬಿಕರಗ ಹೊತ್ತಗುಡ್ಡ, ಆಮೇಲೆ ನಿಡಸಾಲೆ ಚೌಡಮ್ಮನ ಪೂಜೆಯನ್ನು ಹೊತ್ತ ಗುಡ್ಡ, ಅವನ ಹಿಂದೆ ಉಜ್ಜನಿ ಚೌಡಮ್ಮನ ಪೂಜೆಯನ್ನು ಹೊತ್ತ ಗುಡ್ಡ, ಇವರ ಹಿಂದೆ ಹೆಬ್ಬಾರೆಗಳನ್ನು ಹೊತ್ತ ಆರು ಜನ ಹೆಬ್ಬಾರೆ ಗುಡ್ಡರು. ಕೊಂಡಕ್ಕೆ ಇಳಿದು ಈಚೆಗೆ ಬದುಕಿ ಬರುವುದೇ ಒಂದು ಪವಾಡ. ಜನ ಚಪ್ಪಾಳೆ ತಟ್ಟಿ ಕೇಕೆ ಹಾಕಿ ಹುರಿದುಂಬಿಸುತ್ತಾರೆ. ಗುಡ್ಡರು ಒಂದೇ ಮನಸ್ಸಿನಿಂದ ಓಡುತ್ತಾರೆ. ಇದು ಪ್ರತಿವರ್ಷ ನಡೆಯುವ ಜಾತ್ರೆಯ ಪ್ರಮುಖ ಕಾರ್ಯಕ್ರಮ.

ಮಂಗಳವಾರದ ದಿನ ತಿಂಗಳುದ್ದಿ ಪೊತ್ತಿನಲ್ಲಿ
ಕೆಂಡ ಸುರುದಾವೆ ಮುಗಿಲುದ್ದ। ಚೌಡಮ್ಮ
ಕೊಂಡಾವ ಆಯೇರ ದಂಡದಿಂದ

## ಮನರಂಜನೆ

ಬುಧವಾರ ಬೆಳಿಗ್ಗೆ ದೇವರು ಮೆರೆಸುವ ಆಟ. ಉಜ್ಜಿನಿ ಚೌಡಮ್ಮ, ನಿಡಸಾಲೆ ಚೌಡಮ್ಮಗಳ ಪೂಜೆಯನ್ನು ಆಯಾ ಪೈಕಿಯವರು ಹೊತ್ತುಕೊಳ್ಳುತ್ತಾರೆ. ಹಾಗೆಯೇ ಕರಗ ಮತ್ತು ಹೆಬ್ಬಾರೆಗಳನ್ನು ಸಂಬಂಧಿಸಿದ ಜನ ಹೊತ್ತುಕೊಳ್ಳುತ್ತಾರೆ.



**ಪೂಜಾ ಕುಣಿತ**

ಇವರ ಜೊತೆಗೆ ಜವಳೆ ಕುಣಿತದವರು, ಕೋಲಾಟದವರೂ, ಭಜನೆಯವರೂ, ಭಾಗವಂತಿಕೆ ಮೇಳದವರೂ, ನಗಾರಿ ಮೇಳದವರೂ, ಕುದುರೆ ಕುಣಿತದವರೂ ಸೇರಿಕೊಳ್ಳುತ್ತಾರೆ. ತಮಟೆ, ನಗಾರಿಗಳ ಸದ್ದು ಗಗನ ಮುಟ್ಟುತ್ತದೆ. ಕುಣಿತದ ಗೆಜ್ಜೆಗಳ ಝುಣಝುಣ ಕಿವಿಗೆ ಇಂಪು ತರುತ್ತದೆ.



ಜವಳೆ ಕುಣಿತ

ಒಂದು ಪೂಜೆ ಮೆರೆದಾರೆ ಚಂದ
ಕಾಣೆ ಉಜ್ಜಿನಿ
ಬೆಂಡೀನೋವೆರಡು ವೊಸ ಪೂಜೆ
ಮೆರೆದಾರೆ
ಚಂದ ಕಾಣೆ ಉಜ್ಜಿನಮ್ಮ ರಾಜಬೀದಿ.

ಅದಿನೇಳು ಜವಳೆ ದುಂಬೆದ್ದಿ ಮೆರಿವಾಗ
ದುಂಬುದೂಳಲ್ಲಿ ಮೆರುದಾವು! ಚೌಡಮ್ಮ
ದುಂಬು ಕವುದಾಳು ಕಳಸಾಕೆ.

ವರುಷಕ್ಕೆ ಒಮ್ಮೆ ನಡೆಯುವ ಈ ಸುಂದರ ಕುಣಿತವನ್ನು ನೋಡಲು ಎಲ್ಲೆಲ್ಲಿಂದಲೋ ಜನ ಬರುತ್ತಾರೆ. ನೋಡಿ ಮೈಮರೆಯುತ್ತಾರೆ. ಈ ಸಂದರ್ಭದಲ್ಲಿ ದೇವರುಗಳ ತಬ್ಬಾಟ, ಜವಳೆಗಳ ಮುತ್ತಿಗೆ, ಹೆಬ್ಬಾರೆಗಳ ಗಾಂಭೀರ್ಯ ನಡೆ ಒಂದೊಂದು ವಿಶೇಷವಾಗಿರುತ್ತವೆ.



ತೇರು

ಬುಧವಾರ ಸಂಜೆ ಆರು ಗಂಟೆಗೆ ತೇರು ಎಳೆಯುವ ಕಾರ್ಯಕ್ರಮ. ದೊಡ್ಡ ದೊಡ್ಡ ಗಾಲಿಗಳ ಮರದ ಗಾಡಿ. ಗಾಡಿಯ ಮೇಲೆ ಮನೆಮನೆಯ

ಚಿತ್ತಾರದ ತೇರು. ಅದಕ್ಕೆ ಬಣ್ಣಬಣ್ಣದ ಬಾವುಟಗಳ ಅಲಂಕಾರ. ತುದಿಯಲ್ಲಿ ಕಂಚಿನ ಕಳಸ. ತೇರಿನ ಒಳಗೆ ಚೌಡಮ್ಮನ ಮೂರ್ತಿ. ಈ ತೇರಿಗೆ ಕಟ್ಟಿದ ಹಗ್ಗವನ್ನು ನೂರಾರು ಭಕ್ತರು ಎಳೆಯುತ್ತಾರೆ. ತೇರು ಗಂಭೀರವಾಗಿ ಹರಿಯುತ್ತದೆ. ರಥಬೀದಿಯಲ್ಲಿ ನಲಿಯುತ್ತದೆ. ಜನ ಉಘೇ ಉಘೇ ಎನ್ನುತ್ತಾರೆ.

ರಾತ್ರಿಗೆ ಪಲ್ಲಕ್ಕಿ ಉತ್ಸವದ ಜೊತೆಗೆ ಸಿಡಿಮದ್ದಿನ ಕಾರ್ಯಕ್ರಮವೂ ಇರುತ್ತದೆ. ತಮಟೆ ನಗಾರಿಗಳ ಗತ್ತು ಮತ್ತು ವಿವಿಧ ಕುಣಿತಗಳು ಇಡೀ ರಾತ್ರಿ ಜರುಗುತ್ತವೆ.

## ಹೆಬ್ಬಾರೆ ಕಣ್ಣು ಬಿಚ್ಚುವುದು

ಹೆಬ್ಬಾರೆ ಗುಡ್ಡರಿಗೆ ಯಗಲ ಮ್ಯಾಲೆ ಜನಿವಾರ
ತಾಯೀ ಚೌಡಮ್ಮ ವೊರುವೋರಿಗೆ। ಪೂಜಾರಿಗೆ
ದುಂಡು ಮಲ್ಲಿಗೆ ಬಳೆಸರ.

ಕಂಚೀನೆಬ್ಬಾರೆ ಮಿಂಚುಟ್ಟಿ ಮಳುಗಾವೋ
ಸಂತೋಸಗಾತಿ ಚೌಡಮ್ಮನ। ಯಬ್ಬಾರೆ
ಚಿಕ್ಕೆರೆವಳಿಗೆ ಮಳುಗಾವೋ.

ಈ ಹೆಬ್ಬಾರೆ ಸಂಪ್ರದಾಯ ತುಂಬಾ ವಿಶೇಷವಾದುದು. ಹರಿಜನರು ಬ್ರಾಹ್ಮಣರಾಗುವ ಈ ಪದ್ಧತಿ ತುಂಬಾ ಅಪರೂಪ. ಮೇಲು ಜಾತಿ ಮತ್ತು ಕೀಳುಜಾತಿಗಳ ನಡುವಿನ ತಿಕ್ಕಾಟ ಮತ್ತು ಆಮೇಲೆ ಮೂಡಿದ ಸಾಮರಸ್ಯ ಈ ಪದ್ಧತಿಯ ಹಿಂದೆ ಇದೆ. ಶುಕ್ರವಾರ ಮಧ್ಯಾಹ್ನ ಎಲ್ಲ ಗುಡ್ಡರು ಸೇರಿ ಓಕುಳಿ ಆಡುತ್ತಾರೆ. ನಂತರ ಹೆಬ್ಬಾರಮ್ಮನಿಗೆ 'ಓಕುಳಿ' ಬಣ್ಣ ಉಯ್ಯುತ್ತಾರೆ. ಪೂಜೆ ಮಾಡಿ ಹೆಬ್ಬಾರಿಗೆ ತೊಡಿಸಿದ ಬಟ್ಟೆಗಳನ್ನು ಬಿಚ್ಚುತ್ತಾರೆ. ಇದಕ್ಕೆ ''ಕಣ್ಣು ಬಿಚ್ಚುವುದು'

ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಹೆಬ್ಬಾರೆ ಗುಡ್ಡರು ಜನಿವಾರಗಳನ್ನು ತೆಗೆದು ಹಾಕುತ್ತಾರೆ. ಇಲ್ಲಿಗೆ ಗುಡ್ಡರ ಮಡಿ ಮುಗಿಯುತ್ತದೆ.

ಈ ಸಂದರ್ಭದಲ್ಲಿ ವ್ಯಾಪಾರದ ಜಾತ್ರೆಯು ನಡೆಯುತ್ತದೆ. ಸಿಹಿ ತಿಂಡಿಗಳು, ಖಾರದ ಸಾಮಾನುಗಳು ಹಣ್ಣುಗಳು, ಕಡಲೆಪುರಿ, ಬಣ್ಣಬಣ್ಣದ ಬಳೆಗಳು, ಪೀಪಿ ಗಿಲಕಿಗಳು ಮಾರಾಟವಾಗುತ್ತವೆ. ವಸ್ತುಗಳ ವಿನಿಮಯವಾಗುತ್ತದೆ. ಹೂವು, ಹಣ್ಣು, ಧವನ, ಪತ್ರೆ, ಕಾಯಿ, ಕಡ್ಡಿ ಕರ್ಪೂರಗಳ ಭರ್ಜರಿ ವ್ಯಾಪಾರವಾಗುತ್ತದೆ. ತುಂಬೆ ಹೂವಿನ ಹಾಗೆ ತುಂಬಿದ ಪರಿಸೆ, ಕಡಲೆಕಾಯಿಯ ಹಾಗೆ ಮುಗಿಯುತ್ತದೆ.

## ಚೌಡಮ್ಮನ ಪದಗಳು

ನಮ್ಮ ಜನಪದರಿಗೆ ದೇವರು ಎಂದರೆ ಆಕಾಶದಿಂದ ಇಳಿದು ಬರುವುದಿಲ್ಲ. ಅದು ತಮ್ಮಂತೆಯೇ ಮನುಷ್ಯರೂಪಿಯಾದುದು. ಮಾನವರ ಹಾಗೆಯೇ ಹಲವು ಗುಣಗಳನ್ನು ಪಡೆದಿರುತ್ತದೆ. ಈ ದೇವರು ಉಣ್ಣುತ್ತದೆ, ಉಡುತ್ತದೆ, ಮದುವೆಯಾಗುತ್ತದೆ, ಪ್ರಣಯ ಲೀಲೆಯಲ್ಲಿಯೂ ತೊಡಗುತ್ತದೆ. ಓಡಾಡಿದರೆ ಆಯಾಸಗೊಳ್ಳುತ್ತದೆ. ತಮ್ಮ ದುಡಿಮೆಯ ಕಾಲದಲ್ಲಿ ಇಂಥ ಪದಗಳನ್ನು ಜನ ಹಾಡುತ್ತಾರೆ. ಆ ಮೂಲಕ ಅವರ ಕಷ್ಟಸುಖಗಳನ್ನು ಮರೆಯುತ್ತಾರೆ.

## ರೂಪವಂತೆ ಚೌಡಮ್ಮ

ಚೌಡಮ್ಮ ಬರುವ ಚೆಂದ ಎಷ್ಟು ಅಂದವಾಗಿರುತ್ತದೆ. ಚೌಡಮ್ಮನ ಕಾಲು, ಉಂಗುರದ ಕಾಲು, ನಡು ಬಂಗಾರದ್ದು. ಅವಳು ಬಳುಕುತ್ತಾ ನಡೆಯುತ್ತಾಳಂತೆ.

ಉಂಗುರದ ಕಾಲ ಊರುತ್ತ ಜಾರುತ್ತ
ಬಂಗಾರದ ನಡುವ ಬಳುಕುತ್ತ। ಚೌಡಮ್ಮ
ಬಂದಾಳೆ ಬಳಿಯ ಅಸುರಾಕೆ.

ನಡು ಸಣ್ಣಗಿದ್ದರೆ ಹೆಣ್ಣಿನ ರೂಪ ಬಹು ಚಂದ, ಬಳುಕುವ ಸೊಂಟ ಎಂದ ಮೇಲೆ ಅದು ಸಣ್ಣಗೂ ಇರಬೇಕಲ್ಲವೆ. ಕೂದಲು ಉದ್ದವಿದ್ದಷ್ಟು ಹೆಣ್ಣಿನ ಸೌಂದರ್ಯ ಹೆಚ್ಚುತ್ತದೆ. ಚೌಡಮ್ಮ ಇದಕ್ಕೇನೂ ಹೊರತಲ್ಲ.

ನಡುವೊಂದು ಯಿಡಿಯಲ್ಲೆ ಜಡೆಯೊಂದು ಮಾರಲ್ಲೆ
ಗಡಿಯಾರದೆಣ್ಣೆ ಚೌಡಮ್ಮ! ಉಜ್ಜನಿಯ
ಗಡಿಗೇಗೆ ತನಿಯ ಎರೆದಾಳೆ.

ತಾವು ಬೆಳೆಯುವುದು ರಾಗಿ. ರಾಗಿಯ ಕಡ್ಡಿಯ ಬಣ್ಣವನ್ನು ಚೌಡಮ್ಮನಲ್ಲೂ ಕಾಣುತ್ತಾರೆ. ಚೆನ್ನಾಗಿ ಬಲಿತು ಒಣಗಿದ ರಾಗಿ ಕಡ್ಡಿ, ಚಿನ್ನದ ಬಣ್ಣದಿಂದ ಹೊಳೆಯುತ್ತದೆ.

ರಾಗಿ ಕಡ್ಡಿಯ ಬಣ್ಣ ರನ್ನಮುತ್ತಿನ ಬಣ್ಣ
ತಾಯೀ ಚೌಡಮ್ಮ ಚೆನ್ನು ಬಣ್ಣ

ಚೌಡಮ್ಮ ತಾವು ಕಾಣುವ ಎಲ್ಲದರಲ್ಲೂ ಮೂಡಿ ಬರುತ್ತಾಳೆ. ಅವಳು ಮಾಯಗಾತಿ.

ವೊಂಬಾಳೆಲ್ಲೊಡದಿ ಬಾರೇSS
ಚೌಡಮ್ಮ ನುಚ್ಚಕ್ಕಿಲಿ ನುರುದಿ ಬಾರೇSS
ನೀ ಕುದುರೇ ಮ್ಯಾಲೆ ಕುಣುದಿ ಬಾರೇSS
ಚೌಡಮ್ಮ ನೀ ಚೂಜಿಮ್ಯಾಲೇರಿ ಬಾರೇ.

**ಚೌಡಮ್ಮನ ಹುಲಿ ಬೇಟೆ**

ಚೌಡಮ್ಮ ಹುಲಿಬೇಟೆಯನ್ನು ಮಾಡುತ್ತಾಳೆ. ಅದು ಒಬ್ಬಂಟಿಯಾಗಿ

ಮುದ್ದು ಚೌಡಮ್ಮ ಎದ್ದೆಲ್ಲಿಗೋದಾಳೆ
ಇಬ್ಬಾಣೆ ವುಲ್ಲ ತುಳಕೊಂಡು! ಚೌಡಮ್ಮ
ಅವಳೊಬ್ಬಳಾಡಾಳೆ ಉಲಿಬ್ಯಾಟೆ

ಮಲಗಿದ್ದ ಹುಲಿಯನ್ನು ಕೆಣಕುವರುಂಟೆ? ಆದರೆ ಚೌಡಮ್ಮ ಕೆಣಕುತ್ತಾಳೆ. ಆದ್ದರಿಂದಲೇ ನಿನ್ನದು ದೊರೆ ಬುದ್ಧಿ ಎಂದು ಚೌಡಮ್ಮನನ್ನು ಹೊಗಳುತ್ತಾರೆ.

ಒಳಗೆರೆ ಒಳಗೆ ಒಡ್ಡೀ ಚಂಡಾಡೋಳೆ
ಮಲಗಿದ್ದ ಉಲಯ ಕೆಣಕೋಳೆ। ಚೌಡಮ್ಮ
ಸರಿ ಕಾಣೆ ನಿನ್ನ ದೊರೆ ಬುದ್ಧಿ.

## ಚೌಡಮ್ಮನ ಯುದ್ಧ

ಹುಲಿ ಬೇಟೆಯಾಡುವ ಸಾಹಸಿ, ಯುದ್ಧ ಮಾಡಲು ಹೆದರುವಳೇ? ಯುದ್ಧ ಮಾಡುವಾಗ ಉತ್ತಮರ ಮಗನ ಕೊಲಬೇಡ ಎಂಬ ಬುದ್ಧಿ ಮಾತನ್ನು ಹೇಳುತ್ತಾರೆ.

ಕೋಳಿ ಕೂಗಿವೆ ಕುಂಬಳದೂವಿಗೆ
ಬೆಟ್ಟ ಸಾರೀದೆ ಬಿದರೀಗೆ। ಚೌಡಮ್ಮ
ಕತ್ತಿ ಕೂಗೀದೆ ಜಗಳಾಕೆ। ಚೌಡಮ್ಮ
ಉತ್ತಮರ ಮಗನ ಕೊಲಬೇಡ। ಚೌಡಮ್ಮ
ಯೆಚ್ಚೀನ ಬಾಗ್ಯಾವ ಕೊಡಸೇವು॥

ಚೌಡಮ್ಮ ದೂರದಲ್ಲಿ ಯುದ್ಧ ಮಾಡುವಾಗ ಉಜ್ಜಿನಿಗೆ ಸುದ್ದಿ ಬರುವುದು ಹೇಗೆ? ಚೌಡಮ್ಮ ಆ ಕೆಲಸವನ್ನು ತನ್ನ ಮೆಚ್ಚಿನ ಗಿಣಿಗಳಿಗೆ ಹೇಳಿದ್ದಾಳೆ.

ದುಂಡಿ ಚೌಡಮ್ಮ ದಂಡಿಗೋದೇನಿಂದ
ದಂಡಿನಿಂದೇಳು ಗಿಣಿ ಬಂದೋ। ಚೌಡಮ್ಮ
ದುಂಡೀ ನೀನಿದ್ದ ಬಗೆಯೇಗೆ॥

**ಚೌಡಮ್ಮನ ಸಂಸಾರ**

ಸಾಹಸಿ ಚೌಡಮ್ಮ ಸಂಸಾರಿಯೂ ಹೌದು. ಚೌಡಮ್ಮನಿಗೆ ಗಂಡನುಂಟು, ಮಕ್ಕಳುಂಟು. ಎಲ್ಲರ ಸಂಸಾರದಂತೆಯೇ ಚೌಡಮ್ಮನ ಸಂಸಾರ ಕೂಡ. ಚೌಡಮ್ಮನ ಗಂಡ ಕೃಷ್ಣನಲ್ಲವೆ? ಎಲ್ಲಿ ಬಿಟ್ಟಾನು ಅವನ ಸರಸದ ಬುದ್ಧಿ?

ಅರಸೆ ಚೌಡಮ್ಮ ಪುರುಸಾರೆಲ್ಲಿಗೋದ್ರು
ನರಸೀಪುರದ ನಡುವೊಳ! ತೋಪಲ್ಲಿ
ಸರಸಾನಾಡಾಕೋಗಿ ಬರಲಿಲ್ಲ.

ಚೌಡಮ್ಮ ಬಸುರಿಯಾಗಿದ್ದಾಳೆ, ಬಾಣಂತಿಯೂ ಆಗಿದ್ದಾಳೆ. ಬಾಣಂತಿಗೆ ದಿನವೂ ನೀರು ಉಯ್ಯಬೇಕಲ್ಲ?

ತೆಂಗಿನಮರಕೆ ತಿಂಗಳಿಂದ ನೀರಿಲ್ಲ
ತಿಂಗಳ ಬಾಣಂತಿ ಚೌಡಮ್ಮ! ಉಯ್ದುಕೊಂಡ ನೀರು
ತೆಂಗಿನಮರಕೆ ಆದವಾದೊ.

ಚೌಡಮ್ಮನ ಮಗ ಈಗ ದೊಡ್ಡವನಾಗಿದ್ದಾನೆ. ಆಟ ಆಡಲು ಹೋಗಿದ್ದಾನೆ. ತನ್ನ ಮಗನ ಬರುವನ್ನು ಚೌಡಮ್ಮ ಕಾಯುತ್ತಿದ್ದಾಳೆ.

ಊರ ಮುಂದೆ ನಿಂತುಕೊಂಡು ಯಾರ ನೋಡಿ ಚೌಡಮ್ಮ
ದೂರಕೋಗವನೆ ನಿನ್ನ ಮಗ.

ಚೌಡಮ್ಮನ ಮಗನ ಹೆಸರು ಮಲ್ಲಿಗೆ. ಎಂಥ ಮೋಹಕ ಹೆಸರು!

ಮಗನೆಸರು ಮಲ್ಲೀಗೆ ತಾಯಿ ಚೌಡಮ್ಮ
ಸತಿಪುರುಸರೆಸರು ಕೃಷ್ಣಾರು.

ಹೀಗೆ ಚೌಡಮ್ಮ ಎಲ್ಲ ಜನರಂತೆ ತಾನೂ ಜೀವನ ನಡೆಸುತ್ತಾಳೆ. ಎಲ್ಲರಂತೆ ಸಂಸಾರಿಯಾಗುತ್ತಾಳೆ. ಕಷ್ಟಸುಖಗಳಲ್ಲಿ ಬಾಳುತ್ತಾಳೆ. ಈ ಮೂಲಕ ಜನ ಚೌಡಮ್ಮನಲ್ಲಿ ತಮ್ಮನ್ನೇ ಕಂಡುಕೊಂಡಿದ್ದಾರೆ.

* * *



ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು